ಓಹಿಲನ ಸಂಗತಿಯು ಉದ್ಭಟ ರಾಜನೂ, ಅವನ 'ಭಾವದ ಬಳಿಕೆಯ ಬೆಳೆಸೆನಿರ್ಪ ವಲ್ಲಭೆಯೂ' ನೆತ್ತವಾಡುವಾಗ ವಿನೋದಕ್ಕಾಸ್ಪದವಾಗಿ ಚರ್ಚೆಗೆ ಬರುವುದು. ತನ್ನ ಕಾಂತೆಗೆ ರಾಜನು, ಇದಾವ ಹೆಚ್ಚಿನ ಕೆಲಸ — ನಾನು ಪುರಸಹಿತ ಹೋಗುವೆನು ಎಂದು ಪಣ ತೊಡುವನು. ಅದರಂತೆಯೆ — 'ಕೊಂಡೊಯ್ವಂ ಕೊಂಡೊಯ್ವಂ ಈ ಭಕ್ತಾಗ್ರಣಿ. ಈ ವಸ್ತುವೇ ಸೋಮ ರಾಜನ ಉದ್ಭಟ ಕಾವ್ಯದಲ್ಲಿ ನಿರೂಪಿತವಾಗಿದೆ.

ಓಹಿಲನ ಭಕ್ತಿಕಥೆ ಇನ್ನೊಂದು ರಗಳೆಯಲ್ಲಿ ಬೇರೆ ರೀತಿಯಲ್ಲಿ ಚಿತ್ತಾಕರ್ಷಕವಾಗಿದೆ. ಗುಜ್ಜರ ದೇಶದ ಓಹಿಲನಿಗೆ ಸೋಮನಾಥ ಗುಡಿಯ ಕದವನ್ನು ತೆಗೆಯಲು ಅಲ್ಲಿಯ ಪೂಜಾರಿಗಳು ನಿರಾಕರಿಸುವರು. ಅದೇ ದಿನ ಶಿವನು ಕನಸಿನಲ್ಲಿ ಹೋಗಿ ಎಚ್ಚರಿಸಲು ಓಹಿಲನಿಗೆ ಪ್ರವೇಶ ವಾಯಿತು. — "ಓಹಿಲ ದೇವನೊಳಪೊಕ್ಕು ಜೀವಂ ಬಂದಂತೆ ಪರಿತಂದು ಸೋಮನಾಥನಂ ತೆಗೆದಪ್ಪಿ ಬಿಗಿದಪ್ಪಿಯಮರ್ದಪ್ಪಿ ಸೋಂಕಿನೊಳಪ್ಪಿ ಮೆಯ್ಯೊಳಪ್ಪಿ ಕಣ್ಣೊಳಪ್ಪಿ ಮನದೊಳಪ್ಪಿ ಚಿತ್ತದೊಳಪ್ಪಿ ತಣಿವಿಡಿದು, ಸುಖಂಬಡೆದು ಕಂಡುಕಂಡು, ಶಿವ ಮರುಳ್ಗೊಂಡು, ಆಲಿಂಗನಮಂ ಸಡಿಲ್ಚಿ, ಪುಳಕೆಳ್ದು ಹೊಮ್ಮಿ ಹೊರಳ್ದು, ಜುಮ್ಮನೆ ಜೆಮರ್ತು ಕೊರ್ಬಿ, ಕೊನರ್ತು ಉಬ್ಬಿ ಯುರುಳ್ದಬ್ಬರಿಸುತಿರ್ಪಾ" ಓಹಿಲಯನು ದಿವ್ಯ ಪೂಜೆಯ ದಿವ್ಯ ಶರಣ. ಆದರೂ ಈತನಿಗೆ ವಿಚಿತ್ರ ವರವಾಯ್ತು: "ಹನ್ನೆರಡು ಬರಿಸಂ ಹಿಗ್ಗಿ ಪೊರೆಯೇರಿ ಗುಗ್ಗುಳಮಂ ತಂದೆಮಗಿಕ್ಕೆ ಸಗ್ಗವವರು ಬೆರಗಾಗೆ, ಶರೀರಂ ಬೆರಸು ಕೊಂಡಯ್ದಪೆವೆನೆ' ಹೊಂಗಿ ಹೊರೆಯೇರಿ ನೋಡಿ ನಲವೇರಿ ಹಿಗ್ಗಿ ಹರುಷಂದಳೆದೋಹಿಲಯ್ಯಂ" ಈ ಸಾಹಸ ನಿಧಿಗೆ ಬಂತು ಪರೀಕ್ಷಾ ಕಾಲವು. ದಿನದಿನವೂ ಧೂಪದಾರತಿ: "ಪಾತ್ರೆಯಂ ತಂದು ಮುಂದಿರಿಸಿ ಸಿಡಿಲ ಕಿಡಿಯಂತಿರ್ಪ ಕೆಂಡಗಳಂ ಕುಪ್ಪಳಿಸಿ, ಗುಗ್ಗಳಮಂ ಮೇಲೆ ತಂದು ಸುರಿಯೆ, ಗಳಗಳ ನರಳ್ದು ಚಿಮಿಚಿಮಿಸಿ ಕಾಯ್ದ ಧೂಪರ ಸವಿಯ ಹೊಗೆಯನುಗುಳೆ ಬೀಸುವಾಗಳುಂ ಅಮೃತರಸದ ತುಂತುರು ತೆರಳ್ದಂತೆ ಧೂಪವೆತ್ತಿ ಕಂಪುತೆರೆ ಮುಸಗಿ ತೀಡುತ್ತೆ ಪರಿಮಳದ ಮುಂಜು ಕವಿವಂತೆ ಸವಿಯ ತುಷಾರವನೊತ್ತುವಂತೆ ಧೂಪದ ಸವಿಯು ಸರ್ವಾಂಗವಮಂ ಪುಗೆ, ಲೇಸಿಂಗೆ ಲೇಸನರಸಿ ತಂದಿಕ್ಕುವ ಧೂಪದ ಸೊಗಸಿನ ಸೊಕ್ಕಿ ಸವಿಯ ಸಾಲಿಡೆ" — ಓಹಿಲನಿಗೆ ಧೂಪದೋಹಿಲನೆಂಬ ಹೆಸರು ಜಗದಗಲ ಹಬ್ಬಿತು. ಇದೇ ಪ್ರಕಾರ ಹನ್ನೆರಡು ವರುಷ ಈ ಭಕ್ತನು ಎಲ್ಲೆಲ್ಲಿಯ ಗುಗ್ಗಳವನ್ನು ತಂದರ್ಪಿಸುತ್ತ ಬಂದನು. 'ದುಮ್ಮಳಂ ಒರ್ಮೆ ಕವಿದು ದುಮ್ಮಾನಂ ಕಾಹೇರಿ ಆಪತ್ತೆಡೆಗೊಂಡು ಮೆಯ್ಗಂದಿ ಮನಂ ತಾರಿ ಬುದ್ಧಿ ಕಾವುಳಂ ಮುಸಗಿ, ಚಿತ್ತಂ ಕೊರೆದು ಜೀವಂ ಬೆಂದು' ಹೋದರೂ ಶಿವಧೋ ಎನ್ನುತ್ತ 'ಕಣ್ಣೊಳು ಹರಣಂ ಕಯ್ಯೊಳು ಕಾಯುವಾಗಿರ್ದನು.'

"ಬಾಳ್ಗಿನ್ನ ಸೋಮಯ್ಯ ತಂದೆ ಎನುತೆತ್ತಿದಂ
ಧೂಪಮಂ ಪೊತ್ತು ಜನನದ ಹೊರೆಯನಿಳುಪಿದಂ
ಧೂಪಮಂ ಹೆಗಲಗೇರಿಸಿ ಸಾವನಿಳುಪಿದಂ"

ದಿನದಿನವೂ ಕಂಬಿಯ ಮೇಲಿಂದ ಹೊತ್ತು ತಂದು ತಂದು ಕಾಯವು ಕುಸಿದು ತಗ್ಗಿತು; ಹೆಗಲೆಲವು ನೆರೆಮುಕ್ಕಾಯಿತು; ಹಜ್ಜೆ ಹುಣ್ಣು ಹುಣ್ಣಾಯಿತು. ಅಂಗಾಲದಲ್ಲಿ ಉರಿಯೆದ್ದು ಬೊಕ್ಕೆ ಹುಟ್ಟಿ ನೆತ್ತರುಗುಳಿತು. ಸರ್ವ ತ್ರಾಣವೂ ಜಗುಳಿತು. ತನು ಜರ್ಝರಿತವಾಯಿತು.

"ಮನವೆ ಕೈಕಾಲಾಗಿ ನಡೆವುತಿರ್ದಂ ನೋಡ" — ಏನನ್ನೂ ಲೆಕ್ಕಿಸದೆ ಕಾದುರಿಗೆ ಧೂಪವಿಕ್ಕಿ ಕೆಂಡವಂ ಸುರಿದು ಕುಣಿಕುಣಿದಾಡಿ ಮಣಿದಾಡಿ ತಣಿದನು.

ಇಂಥ ನೋಂಪಿ, ಈ ಅಚಲ ನಿಷ್ಠೆ ಇನ್ನೆಲ್ಲಿ ಸಿಕ್ಕೀತು?

ಕೊನೆಯಲ್ಲಿ 'ಮೊಳಕೆಯ್ಯಮಂ ತೆಯ್ದು ಬಾವನ್ನಮಂ ನೆರೆವುತಿರ್ಪ'ಂತೆ ಮಾಡಿ, ಮೆರೆದ ಒಲಘಾಂಡ ಮೂರ್ತಿಯನ್ನೂ ನೆನೆಯಬಹುದು. ಶಿವನ ಬಯಕಯಂತೆ 'ಹಸೆಯ ಮೇಗಣ ಮಗಳ ಮುಡಿಯನಿತ್ತ', 'ಎನಗವರೆ ಲಾಭವವರ್ಗಾನೆ ಲಾಭಂ ಕೇಳ್' — ಎಂದು ಸಾರುವ ಮಾನಕಂಜರನು ಅದ್ವಿತೀಯನಾಗಿದ್ದಾನೆ. ರೇವಣಸಿದ್ಧ ಶಂಕರ ದಾಸಿಮಯ್ಯ ಮೊದಲಾದ ಹಿರಿ ಶರಣರಿಗಿಂತ ಈ ಸಾಮಾನ್ಯ ಶರಣರು ಹರೀಶ್ವರನ ಕೈವಾಡದಲ್ಲಿ ಹೆಚ್ಚು ಮಿಗಿಲಾಗಿ, ಹೆಚ್ಚು ಹೃದಯವೇಧಕ ಮೂರ್ತಿಗಳಾಗಿ ಬೆಳಗಿದ್ದಾರೆ. ಕೂಡಲು ಸಂಗನು ಚನ್ನಯ್ಯನ ಮನೆಯಲ್ಲಿ ಉಂಡದ್ದಾಗಲಿ, 'ಕೂತು ಮಾದರಚೆನ್ನನೊಡನುಂಡೆವೆಲೆ ಚೋಳ' ಎನ್ನುವ ಶಿವನ ಪ್ರೇಮದ ಕಾಣಿಕೆಯಾಗಲಿ ಭಕ್ತಿಕಾಂಡದ ಚರಿತ್ರೆಯಲ್ಲಿ ಅಚ್ಚೊತ್ತಿ ನಿಲ್ಲಬೇಕಾದದ್ದೆ. 'ನಾಮರಸದೊಳಿಂತು ಪ್ರೇಮರಸ'ವನ್ನು ಹರಿಯಿಸಿ ಲೋಕಕ್ಕೆಲ್ಲ ಪೂಜ್ಯ ಕವಿಯಾದನು.

ಕವಿಯ ಚಿತ್ತವೂ ನೆನಹೂ ಮನಸ್ಸೂ— ನುಡಿವುದೂ ಕರೆವುದೂ ನಡೆವುದೂ—ನೆಲದ ಮೇಲಿರಲಿ, ಭಾವಿಕರ ಬಗೆಯೊಳಗಿರಲಿ — ಒಂದು ನಿಚ್ಚ ಸತ್ಯದ ನೆಲಗಟ್ಟಿನ ಮೇಲೆ ನಿಂತಿದೆ. ಭಕ್ತಿಯ ರಸ ನುಡಿಯಿರಲಿ—ಬಿರುನುಡಿಯಿರಲಿ—ಶಾಂತಿವೆನ್ನಿ—ಉಗ್ರವೆನ್ನಿ—ರೂಪಕವೆನ್ನಿ—ಉತ್ಪ್ರೇಕ್ಷೆಯೆನ್ನಿ-ಎಲ್ಲವೂ ಮಂಗಳ ಮನೋರಥದ ಹಾಸುಹೊಕ್ಕಾಗಿ ಹರಿದಾಡುತ್ತಿದೆ; ನೆಡೆದಾಡುತ್ತಿದೆ. ಒಟ್ಟಿಗೆ ಮಾಯೆ ಛಾಯೆಗಳನ್ನು ಬೀಸಾಡಿದ್ದಾನೆ; ತಿಳಿವು ವಿರಕ್ತಿಗಳಿಗೆ ಧೂಪದಾರತಿ ಬೆಳಗಿದ್ದಾನೆ. ಪರವಸ್ತುವಿನ ಕಣ್ಣಬೆಳಕು — ನೇಸರನನ್ನು ಕೂಡಿಕೊಂಡೆ ಎಷ್ಟು ಬಗೆಯ ಕಿರಣಗಳಲ್ಲಿ ಹರಿದಾಡಬಲ್ಲದೆಂಬುದುದನ್ನು ನಮಗೆ ಅರುಹಿದ್ದಾನೆ. ಸಾಕಿಷ್ಟು.

---



